KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಮಾರ್ಚ್ ೧೮, ೨೦೧೦ (ಫಾಲ್ಗುಣ ೨೭, ಶಕ ವರ್ಷ ೧೯೩೨) | ಸಂಚಿಕೆ ೧೧ |
|---|---|---|

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

### ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 93 ಎಲ್‌ಎಂಡಬ್ಲ್ಯೂ 2008, ಬೆಂಗಳೂರು, ದಿನಾಂಕ: 04ನೇ ಜನವರಿ, 2010.**

ಕರ್ನಾಟಕ ರಾಜ್ಯಾದಂತ " ಮೀನು ಹಿಡಿಯುವುದು, ಮೀನು ಕ್ಯೂರಿಂಗ್, ಮೀನು ಪೀಲಿಂಗ್, ಕಪ್ಪೆ ಕಾಲು ರಫ್ತು ಮಾಡುವುದು " ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಈ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ ಕನಿಷ್ಟ ವೇತನವನ್ನು ಪರಿಷ್ಕರಿಸಲು ಸರ್ಕಾರದ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದ ವಿಶೇಷ ಪತ್ರಿಕೆಯ ಭಾಗ 4(ಎ) ರಲ್ಲಿ ದಿನಾಂಕ: 2–4–2009 ರಂದು ಪ್ರಕಟಿಸಿ, ಕನಿಷ್ಟ ವೇತನ ಕಾಯ್ದೆ 1948ರ ಕೇಂದ್ರಾಧಿನಿಯಮ ಸಂ: (XI)ರ 5ನೇ ಪ್ರಕರಣದ 1ನೇ ಉಪ ಪ್ರಕರಣದ (ಬಿ) ಖಂಡದ ಪ್ರಕಾರ ಇದರಿಂದ ಭಾದಿತರಾಗುವ / ಸಂಬಂಧವಿರುವ ವ್ಯಕ್ತಿಗಳ ಗಮನಕ್ಕೆ ತರಲಾಗಿದ್ದು, ಅವರಿಂದ ಸಲಹೆ / ಆಕ್ಷೇಪಣೆಗಳನ್ನು ಸ್ವೀಕರಿಸಲು 2 ತಿಂಗಳ ಕಾಲಾವಧಿಯನ್ನು ನೀಡಲಾಗಿತ್ತು. ಈ ಬಗ್ಗೆ ಸ್ವೀಕರಿಸಲಾದ ಸಲಹೆ / ಆಕ್ಷೇಪಣೆಗಳನ್ನು ಕನಿಷ್ಟ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸದರಿ ಮಂಡಳಿಯಲ್ಲಿ ಸರ್ಕಾರದ ಪ್ರಸ್ತಾವನೆಯನ್ನು ಸುಧೀರ್ಘವಾಗಿ ಸಮಾಲೋಚಿಸಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಮಂಡಳಿಯು ಸರ್ಕಾರಕ್ಕೆ ತನ್ನ ಶಿಫಾರಸ್ಸು ನೀಡಿರುತ್ತದೆ.

ರಾಜ್ಯ ಕನಿಷ್ಟ ವೇತನ ಸಲಹಾ ಮಂಡಳಿಯ ಶಿಫಾರಸ್ಸನ್ನು ಗಣನೆಗೆ ತೆಗೆದುಕೊಂಡು 1948ರ ಕನಿಷ್ಟ ವೇತನ ಕಾಯ್ದೆ 3ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಹಾಗೂ 5ನೇ ಪ್ರಕರಣದ (1) ನೇ ಉಪ ಪ್ರಕರಣದ (ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಕರ್ನಾಟಕ ರಾಜ್ಯಾದ್ಯಂತ " ಮೀನು ಹಿಡಿಯುವುದು, ಮೀನು ಕ್ಯೂರಿಂಗ್, ಮೀನು ಪೀಲಿಂಗ್, ಕಪ್ಪೆ ಕಾಲು ರಫ್ತು ಮಾಡುವುದು " ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಅನ್ವಯವಾಗುವಂತೆ, ಕನಿಷ್ಟ ವೇತನವನ್ನು ಈ ಅಧಿಸೂಚನೆಯ ಅನುಸೂಚಿಯಲ್ಲಿರುವಂತೆ ಪರಿಷ್ಕರಿಸಲಾಗಿದೆ.

**ಅನುಸೂಚಿ**

| ಕ್ರ. ಸಂ. | ಕೆಲಸದ ವಿವರಗಳು | ಕನಿಷ್ಠ ವೇತನ (ಪ್ರತಿ ತಿಂಗಳಿಗೆ) |
|---|---|---|
| 1 | 2 | 3 |
| 1 | ಪ್ರಾಜೆಕ್ಟ್ ಆಫೀಸರ್, ಪ್ಲಾಂಟ್ ಇನ್ ಚಾರ್ಜ್/ ಮಾರ್ಕೆಟಿಂಗ್ ಆಫೀಸರ್/ ಫೀಲ್ಡ್ ಆಫೀಸರ್ / ಇಂಜಿನಿಯರ್ | 4133–00 |
| 2 | ಕೋಲ್ಡ್ ಸ್ಟೋರೇಜ್ ಸೂಪರ್ ವೈಸರ್ / ಪ್ರೊಸೆಸಿಂಗ್ ಸೂಪರ್ ವೈಸರ್/ ಪ್ರೊಡಕ್ಷನ್ ಸೂಪರ್ ವೈಸರ್ ಮತ್ತು ಇತರೆ ಸೂಪರ್ ವೈಸರ್ | 4050–00 |
| 3 | ಕೆಮಿಸ್ಟ್ / ಟೆಕ್ನೀಷಿಯನ್ ಕಮ್ ಸೂಪರ್ ವೈಸರ್, ಆಪರೇಟರ್, ಮೆಷಿನ್ ಆಪರೇಟರ್, ಪ್ರೊಸಸ್ ವರ್ಕರ್ಸ್, ಕ್ಯೂರಿಂಗ್ ಆಪರೇಟರ್ ಗ್ರೇಡಿಂಗ್, ಹೆವಿಡ್ಯೂಟಿ ಡ್ರೈವರ್, ಎಲೆಕ್ಟ್ರೀಷಿಯನ್, ಕಾರ್ಪೆಂಟರ್, ಮೆಕ್ಯಾನಿಕ್, ಬಾಯ್ಲರ್ ಆಪರೇಟರ್, ರೆಫ್ರಿಜರೇಟರ್ ಮೆಕ್ಯಾನಿಕ್, ಡ್ರೈವರ್, ಟೆಲಿಫೋನ್ ಆಪರೇಟರ್, ಪರ್ಸಿಸ್ ಮತ್ತು ಯಾಂತ್ರಿಕ ದೋಣಿಗಳಲ್ಲಿ ಮೀನು ಹಿಡಿಯುವ ಕಾರ್ಮಿಕರು, ನಾಡ ದೋಣಿಗಳಲ್ಲಿ ಹೋಗಿ ಬಲೆಯೊಂದಿಗೆ ಮೀನುಗಳನ್ನು ಹಿಡಿಯುವವರು. | 3609–00 |
| 4 | ಲ್ಯಾಬೋರೇಟರಿ ಸಹಾಯಕ, ಪ್ರೊಕ್ಯೂರ್‌ಮೆಂಟ್ ಸಹಾಯಕ, ನೀರು ಶೇಖರಣೆಗೆ ಅಚ್ಚು ನಿರ್ಮಿಸುವುದು, ಸೀಗಡಿ/ ಮೀನು ಮರಿಗಳ ಉತ್ಪಾದನೆಯ ಸಹಾಯಕರು, ಮೀನು ಮರಿಗಳನ್ನು ಸಾಗಿಸುವ ಮತ್ತು ಕೆರೆಗಳಲ್ಲಿ ಬಿಡುವ ಕೆಲಸಗಾರರು, ಬಲೆಗಳನ್ನು ಸೆಳೆಯುವವರು, ಬೋಟ್ ಡ್ರೈವರ್, ಲೈಟ್ ಬೋಟ್ ಡ್ರೈವರ್. | 3437–96 |
| 5 | ಐಸ್ ಡಂಪರ್ / ಡಂಪರ್, ದೋಣಿಗಳಿಂದ ಇಳಿಸುವವರು, ಮಾರುಕಟ್ಟೆಗೆ ಸಾಗಿಸುವವರು, ಮಾರಾಟಗಾರರು, ಯಂತ್ರೀಕೃತ ದೋಣಿಗಳನ್ನು ನೀರಿನ ಮಟ್ಟಕ್ಕೆ ಒಯ್ಯುವ ಮತ್ತು ನೀರಿನಿಂದ ಮೇಲಕ್ಕೆ ತರುವ ಕಾರ್ಮಿಕರು, ಡೆಕ್ ಲೋಡರ್, ಡೆಕ್ ಅನ್ ಲೋಡರ್, ಮೀನುಗಳನ್ನು ಕತ್ತರಿಸುವವರು, ಸಿಪ್ಪೆ ತೆಗೆಯುವವರು ಮತ್ತು ಸ್ವಚ್ಛಗೊಳಿಸುವವರು, ಐಸ್ ಪುಡಿ ಮಾಡುವವರು. | 3173–36 |
| 6 | ಮೀನುಗಳಿಗೆ ಐಸ್ ಮತ್ತು ಉಪ್ಪು ಬೆರೆಸುವವರು, ಮೀನುಗಳನ್ನು ಒಣಗಿಸುವುದು ಮತ್ತು ಕಾವಲು ಕಾಯುವವ, ಮರಿಗಳನ್ನು ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಸಾಗಿಸುವವರು, ಗೊಬ್ಬರ ಆಹಾರ ಹಾಕುವವರು, ಸೀಗಡಿ ಮೀನುಗಳನ್ನು ಹಿಡಿಯುವವರು [ನದಿ, ಕೆರೆ ಮತ್ತು ಕೊಳಗಳಲ್ಲಿ] ಮೀನುಗಳನ್ನು ಸಾಗಿಸುವವರು, ವಾಚ್‌ಮನ್, ಅಟೆಂಡರ್, ವೆಹಿಕಲ್ ಕ್ಲೀನರ್, ಶುಚಿ ಮಾಡುವವರು, ಮಜ್ದೂರ್ [ವರ್ಕಿಂಗ್ ಆನ್ ಲ್ಯಾಂಡರ್] ಸ್ಕಾವೆಂಜರ್ | 3173–36 |
| 7 | ಉಪ್ಪು ನೀರು ಸೀಗಡಿ ಕೃಷಿಯಲ್ಲಿ ನೇಮಿಸಿಕೊಂಡಿರುವ ಕಾರ್ಮಿಕರು | ಪ್ರತಿ ದಿನಕ್ಕೆ 121–82 |
| 8 | ಸಸಿಕಳೆ ಕೀಳುವವರು [ಪ್ರತಿ ದಿನಕ್ಕೆ] | 82–97 |
| **ಕಛೇರಿ ಸಿಬ್ಬಂದಿ** | | **ಪ್ರತಿ ತಿಂಗಳಿಗೆ** |
| 1 | ಅಕೌಂಟೆಂಟ್ / ಶೀಘ್ರಲಿಪಿಗಾರರು / ಪದವೀಧರ ಸಹಾಯಕ /ಪ್ರಥಮ ದರ್ಜೆ ಸಹಾಯಕ | 3515–65 |
| 2 | ಗುಮಾಸ್ತ | 3278–26 |
| 3 | ಬೆರಳಚ್ಚುಗಾರ | |
| 4 | ಸ್ಟೋರ್ ಕೀಪರ್ | |
| 5 | ಆಫೀಸ್ ಬಾಯ್ | 3173–26 |
| 6 | ಪ್ಯೂನ್ | |

| ಫೀರಿಂಗ್ ಮತ್ತು ವೀನಿಂಗ್ ವಿಭಾಗದಲ್ಲಿ ತೊಡಗಿರುವ ಕೆಲಸಗಾರರಿಗೆ | | |
|---|---|---|
| ಅ | ದೊಡ್ಡಗಾತ್ರದ್ದು | ಪ್ರತಿ ದಿನಕ್ಕೆ 121–82 |
| ಆ | ಚಿಕ್ಕಗಾತ್ರದ್ದು | |
| ಇ | ಬೀ ಹೆಡ್ಡಿಂಗ್ | |
| ಕಪ್ಪೆಗಳ ಕಾಲುಗಳು | | |
| ಅ | ಜಂಬೋ | ಪ್ರತಿ ದಿನಕ್ಕೆ 121–82 |
| ಆ | ದೊಡ್ಡ ಗಾತ್ರದ್ದು | |
| ಇ | ಮಧ್ಯ ಗಾತ್ರದ್ದು | |
| ಈ | ಸಣ್ಣ ಗಾತ್ರದ್ದು | |

**ತುಟ್ಟಿಭತ್ಯೆ:**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 3196 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3196 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 3.5 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ಜೀವನ ನಿರ್ವಹಣಾ ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2007 ರಿಂದ ಡಿಸೆಂಬರ್ 2007)ರ ಸರಾಸರಿ ಆಧಾರದ ಮೇಲೆ 2008 ಎಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ನಾಲ್ಕು ರಜಾ ದಿನಗಳಿಗಾಗಿ ವೇತನವನ್ನು ನೀಡುವುದು ಸೇರಿದಂತೆ ಲೆಕ್ಕ ಹಾಕಲಾಗುವುದು.
2. ಕೆಲಸದ ಸ್ವರೂಪವು ಒಂದೇ ರೀತಿಯದಾಗಿರುವ ಸಂದರ್ಭದಲ್ಲಿ ಮಹಿಳಾ ಕಾರ್ಮಿಕರಿಗೆ ಪುರುಷ ಕಾರ್ಮಿಕರಿಗೆ ನೀಡುವ ವೇತನದ ದರಗಳನ್ನೇ ಸಂದಾಯ ಮಾಡತಕ್ಕದ್ದು.
3. ವೇತನ ಪಾವತಿಯಲ್ಲಿರುವ ದರವು ಹೆಚ್ಚಾಗಿದ್ದಲ್ಲಿ, ಆ ಹೆಚ್ಚಾಗಿರುವ ದರಗಳಲ್ಲಿ ವೇತನ ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.
4. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ವೇತನದ ಕೂಲಿಯ ಪ್ರಮಾಣವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
5. ಅಧಿಸೂಚನೆಯಲ್ಲಿ ಸೂಚಿಸದೇ ಇರುವ ವರ್ಗದವರಿಗೆ ಅದೇ ಸ್ವರೂಪದ ಉದ್ಯೋಗದ ಕಾರ್ಮಿಕರಿಗೆ ಕೊಡುವ ವೇತನವನ್ನು ಸಂದಾಯ ಮಾಡತಕ್ಕದ್ದು.
6. ವಾರದ ಅಥವಾ ಹಬ್ಬದ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಟ ವೇತನ ಕಾಯ್ದೆ 1948 ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡು ಪಟ್ಟು ವೇತನವನ್ನು ಕೊಡತಕ್ಕದ್ದು.
7. ಸಾಮಾನ್ಯ ಕೆಲಸದ ಅವಧಿಗಿಂತ ಮೀರಿದ ಕೆಲಸಕ್ಕೆ ಸಾಮಾನ್ಯ ದರಗಳ ಎರಡು ಪಟ್ಟು ವೇತನವನ್ನು ಕೊಡುವುದು.
8. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.
   (ಅ) ಕಿಶೋರಾವಸ್ಥೆ ಕಾರ್ಮಿಕರಿಗೆ ಅವರ ವರ್ಗದ 80 ಪ್ರತಿಶತ ವೇತನವನ್ನು ಕೊಡತಕ್ಕದ್ದು.
   (ಆ) ಅಪ್ರೆಂಟೀಸ್‌ಗಳಿಗೆ ಅವರ ವರ್ಗದ ವೇತನದ ಪ್ರತಿಶತ 75 ರಷ್ಟು ವೇತನವನ್ನು ಕೊಡತಕ್ಕದ್ದು.
   (ಇ) ಕಿಶೋರಾವಸ್ಥೆ ಎಂದರೆ 15 ವರ್ಷ ಮೀರಿದ, ಆದರೆ 18 ವರ್ಷದೊಳಗಿರುವ ವ್ಯಕ್ತಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 155

**ಯು.ಎನ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಾರ್ಮಿಕ ಇಲಾಖೆ

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಸಇ 210 ಎಂಆರ್‌ಇ 2008 (ಭಾಗ), ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ, 2010,**

ಸರ್ಕಾರದ ಅಧಿಸೂಚನೆ ಸಂಖ್ಯೆ:ಸಇ 210 ಎಂಆರ್‌ಇ 2008 (ಭಾ) ದಿನಾಂಕ:15.1.2010 ರಲ್ಲಿ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 11(1)(ix)ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಹಿರಿಯೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ನಾಮನಿರ್ದೇಶನ ಮಾಡಲಾಗಿದ್ದ "ಶ್ರೀ ಎಸ್.ಟಿ. ಮಂಜುನಾಥ ಬಿನ್ ಸಣ್ಣ ತಿಮ್ಮಣ್ಣ, ಬೆಣ್ಣೆ ಈರಪ್ಪನಹಟ್ಟಿ, ಜವಗೊಂಡನಹಳ್ಳಿ ಹೋಬಳಿ ಹಿರಿಯೂರು ತಾಲ್ಲೂಕು ಇವರ ನಾಮನಿರ್ದೇಶನವನ್ನು ರದ್ದುಪಡಿಸಿ ಇವರ ಬದಲಿಗೆ "ಶ್ರೀ ತಿಮ್ಮರಾಜು ಯಾದವ್ ಬಿನ್ ಸಣ್ಣರಂಗಪ್ಪ, ಬೆಣ್ಣೆ ಈರಪ್ಪನಹಟ್ಟಿ, ಜವಗೊಂಡನಹಳ್ಳಿ ಅಂಚೆ ಮತ್ತು ಹೋಬಳಿ, ಹಿರಿಯೂರು ತಾಲ್ಲೂಕು" ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 148

**ಸಿ.ಕೆ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ–1
ಸಹಕಾರ ಇಲಾಖೆ

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಆಇ 4 ವೆಚ್ಚ–12/10, ಬೆಂಗಳೂರು, ದಿನಾಂಕ: 27ನೇ ಜನವರಿ, 2010**

ವಾಣಿಜ್ಯ ತೆರಿಗೆ ಇಲಾಖೆಯ Mission Mode Project ನ ಕರಡು ಯೋಜನಾ ವರದಿ (DPR) ತಯಾರಿಕಾ ಕಾರ್ಯವನ್ನು ರೂ. 20.00 ಲಕ್ಷಗಳ ವೆಚ್ಚದಲ್ಲಿ International Institute of Information Technology ಬೆಂಗಳೂರು, ಈ ಸಂಸ್ಥೆಗೆ ನೇರವಾಗಿ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ವಾಣಿಜ್ಯ ತೆರಿಗೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 152

**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಅಧಿಸೂಚನೆ**

**ಸಂಖ್ಯೆ:ಆಇ 22 ವೆಚ್ಚ–12/10, ಬೆಂಗಳೂರು, ದಿನಾಂಕ: 22ನೇ ಜನವರಿ, 2010**

ಶ್ರೀ ಕೃಷ್ಣದೇವರಾಯರ 500ನೇ ಪೀಠಾರೋಹಣ ಸ್ಮರಣಾರ್ಥ ಅಂಗವಾಗಿ ವಿವಿಧ ಇಲಾಖೆಗಳು ಹಮ್ಮಿಕೊಂಡಿರುವ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಅಗತ್ಯ ಸಂಗ್ರಹಣೆಗಳನ್ನು ನೇರವಾಗಿ ಪಡೆಯಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 153

**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಅಧಿಸೂಚನೆ**

**ಸಂಖ್ಯೆ:ಆಇ 1363 ವೆಚ್ಚ–12/09, ಬೆಂಗಳೂರು, ದಿನಾಂಕ: 23ನೇ ಜನವರಿ, 2010**

"ಸುವರ್ಣ ವಸ್ತ್ರ ನೀತಿ" ಕಾರ್ಯಕ್ರಮದಡಿ, ಜವಳಿ ತಂತ್ರಜ್ಞಾನ ಬಗೆಗಿನ ವಿವಿಧ ತರಬೇತಿಗಳನ್ನು ಗ್ರಾಮೀಣ ನಿರುದ್ಯೋಗಿ ಹಾಗೂ ಕಡುಬಡವರಿಗೆ ನೀಡುವ ಸಲುವಾಗಿ, ಕೇಂದ್ರ ಸರ್ಕಾರದ ಜವಳಿ ಮಂತ್ರಾಲಯದಿಂದ ಪ್ರಾಯೋಜಿತವಾಗಿರುವ Apparel Export Promotion Council (AEPC) ಇದರ ಅಂಗ ಸಂಸ್ಥೆ Apparel Training and Design Centre (ATDC) ಸಂಸ್ಥೆಗೆ, ನೇರವಾಗಿ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ

ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗೆ, ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 154

**ಎನ್. ಚಂದ್ರಕುಮಾರ್**

ಸರ್ಕಾರದ ಉಪ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**COMMERCE & INDUSTRIES SECRETARIAT**

**NOTIFICATION**

**No.CI.54 R & I 2009, Bangalore, Date: 22nd February, 2010.**

Whereas the Commerce and Industries Department and the Karnataka Sugar Institute, Belgaum are Public Authorities in terms of Section 2 (h) of the Right to Information Act, 2005.

Now, in exercise of the powers conferred under section 5 (1) and 5(2) of the Right to Information Act, 2005 (Central Act 22 of 2005) the following officers from the Karnataka Sugar Institute, Belgaum are notified as PIOs/APIOs:

| Sl.No. | Public Authority | PIO | APIO |
|---|---|---|---|
| 1 | Karnataka Sugar Institute, Belgaum | Director, Karnataka Sugar Institute, Belgaum | Manager Karnataka Sugar Institute, Belgaum |

Also under Section 19 (1) of the Right to Information Act, 2005, the Chairman, Karnataka Sugar Institute, Belgaum is hereby notified as the Appellate Authority to exercise powers as provided under the Act.

By Order and in the name of the Governor of Karnataka

P.R. 156

**B.C. PRAKASH**

Under Secretary to Government

Commerce & Industries Department (Co-ordination)

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಆಇ 132 ವೆಚ್ಚ–12/10, ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ, 2010**

ಖಜಾನೆ ಇಲಾಖೆಯ 900 ಗಣಕಯಂತ್ರಗಳಿಗೆ ಒಟ್ಟು 2,87,424.00 ರೂ.ಗಳ ವೆಚ್ಚದಲ್ಲಿ Ms Asiaa date ನ ರವರಿಂದ ನೇರವಾಗಿ Kaspersky Antivirus ಗಳನ್ನು ಖರೀದಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ಕಲಂ 4(ಜಿ) ಅಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಖಜಾನೆ ಇಲಾಖೆಗೆ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 159

**ಎ.ಎನ್. ಶ್ರೀಧರ**

ಸರ್ಕಾರದ ಸಹ ಕಾರ್ಯದರ್ಶಿ (ಆಡಳಿತ)

ಆರ್ಥಿಕ ಇಲಾಖೆ

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಆರ್‌ಡಿ 74 ಎಲ್‌ಜಿಡಿ:2009, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ, 2010**

ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಸಬ್ ಸೆಕ್ಷನ್ (1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಹಾವೇರಿ ಜಿಲ್ಲೆ ಹಿರೇಕೆರೂರು ತಾಲ್ಲೂಕಿನ ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ

ಸಮಿತಿಯನ್ನು ಕೆಳಕಂಡ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪುನರ್ ರಚಿಸಿ ಆದೇಶಿಸಿದೆ.

| ಕ್ರ.ಸಂ | ತಾಲ್ಲೂಕು | ಸದಸ್ಯರು | |
|---|---|---|---|
| 1 | ಹಿರೇಕೆರೂರು | 1). ಶ್ರೀ ಬಿ.ಸಿ. ಪಾಟೀಲ, ಶಾಸಕರು | ಅಧ್ಯಕ್ಷರು |
| | | 2) ಶ್ರೀ ಗಂಗನಗೌಡ ಬಿನ್ ನಾಗನಗೌಡ ಪಾಟೀಲ್ ಸಾ: ರಾಮತೀರ್ಥ | ಸದಸ್ಯರು ಸಾಮಾನ್ಯ |
| | | 3) ಶ್ರೀ ಬಸವರಾಜಪ್ಪ ಬಿನ್ ವೀರಪ್ಪ ಬೇವಿನಹಳ್ಳಿ, ಸಾ: ಮಾವಿನತೋಪು | ಸದಸ್ಯರು ಎಸ್.ಸಿ |
| | | 4) ಶ್ರೀಮತಿ ಅನಂತಲಕ್ಷ್ಮೀ ಕೋಂ ಕೃಷ್ಣರಾಜವರ್ಣೇಕರ್ ಸಾ: ರಟ್ಟಿಹಳ್ಳಿ | ಸದಸ್ಯರು ಮಹಿಳೆ |
| | | 5) ತಹಶೀಲ್ದಾರ್, ಹಿರೇಕೆರೂರು ತಾಲ್ಲೂಕು | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 160

**ಹೆಚ್.ಜೆ. ಲಕ್ಷ್ಮೀನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂಜೂರಾತಿ–3)

## ಅಧಿಸೂಚನೆ

**ಸಂಖ್ಯೆ:ಆರ್‌ಡಿ 468 ಎಲ್‌ಜಿಬಿ 2009, ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ, 2010**

ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಸಬ್ ಸೆಕ್ಷನ್ (1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕು ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಕೆಳಕಂಡ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಹೊಸದಾಗಿ ರಚಿಸಲಾಗಿದೆ.

| ಕ್ರ.ಸಂ | ತಾಲ್ಲೂಕು | ಸದಸ್ಯರು | |
|---|---|---|---|
| 1 | ನೆಲಮಂಗಲ | 1). ಶ್ರೀ ಎಂ.ವಿ. ನಾಗರಾಜು, ಮಾನ್ಯ ಶಾಸಕರು, ನೆಲಮಂಗಲ ವಿಧಾನ ಸಭಾ ಕ್ಷೇತ್ರ | ಅಧ್ಯಕ್ಷರು |
| | | 2) ಶ್ರೀ ಎನ್. ಮುನಿರಾಮಯ್ಯ ಬಿನ್ ನಂಜಯ್ಯ, 6725, ವೀವರ್ಸ್, ಕಾಲೋನಿ, ನೆಲಮಂಗಲ | ಸದಸ್ಯರು ಸಾಮಾನ್ಯ |
| | | 3) ಶ್ರೀ ಹನುಮಂತರಾಯಪ್ಪ ಬಿನ್ ವೆಂಕಟಮುನಿಯಪ್ಪ, ಮಾರಗೊಂಡನಹಳ್ಳಿ, ಕಂಬಾಳು ಅಂಚೆ, ನೆಲಮಂಗಲ ತಾಲ್ಲೂಕು | ಸದಸ್ಯರು (ಪರಿಶಿಷ್ಟ ಜಾತಿ) |
| | | 4) ಶ್ರೀಮತಿ ರಾಜಮ್ಮ ಕೋಂ ಪ್ರಕಾಶ್, ನಂ. 2758, ಭುವನೇಶ್ವರಿ ದೇವಸ್ಥಾನದ ಹಿಂಭಾಗ, ಕೋಟೆ ಬೀದಿ, ನೆಲಮಂಗಲ ತಾಲ್ಲೂಕು | ಸದಸ್ಯರು (ಮಹಿಳೆ) |
| | | 5) ತಹಶೀಲ್ದಾರ್, ನೆಲಮಂಗಲ ತಾಲ್ಲೂಕು, ನೆಲಮಂಗಲ | ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 161

**ಇ. ಈಶ್ವರ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂ)

## ಅಧಿಸೂಚನೆ

**ಸಂಖ್ಯೆ: ಆರ್‌ಡಿ 572 ಎಲ್‌ಜಿಬಿ 2007, ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ, 2010**

**ನಮೂನೆ 29**

**68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ–ನಿಯಮ 96**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (5)ನೇ ಉಪ–ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಹೊರಡಿಸಿದ 30.4.2006ರ ದಿನಾಂಕದ ಎಲ್‌ಎನ್‌ಡಿ/94(ಸಿ)1/2005–06ರ ಕ್ರಮ ಸಂಖ್ಯೆಯ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಸರ್ಕಾರಿ ಕುಂಟೆ ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲೆಗಳನ್ನು ಮತ್ತು ಬೆಂಗಳೂರು ಜಿಲ್ಲಾಧಿಕಾರಿಗಳ ವರದಿಯನ್ನು ರಾಜ್ಯ ಸರ್ಕಾರವು ಪರಿಶೀಲಿಸಿದ ತರುವಾಯ, ಗುಂಡುತೋಪು ಮೇಲಣ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕುದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ಗುಂಡುತೋಪು ಭಾಗವು ಇರುವ ಗ್ರಾಮ | ಗೆದ್ದಲಹಳ್ಳಿ |
| ತಾಲ್ಲೂಕು | ಬೆಂಗಳೂರು ಉತ್ತರ |
| ಜಿಲ್ಲೆ | ಬೆಂಗಳೂರು ನಗರ ಜಿಲ್ಲೆ |
| ಸದರಿ ಭಾಗದ ವರ್ಣನೆ | ಗುಂಡುತೋಪು |
| ಸರ್ಕಾರಿ ಕುಂಟೆ ಸರಿ ಸುಮಾರು ವಿಸ್ತೀರ್ಣ | 0.38 ಗುಂಟೆ (ಸ.ನಂ 57) |
| ಮೇರೆಗಳು | ಪೂರ್ವಕ್ಕೆ: ಖಾಸಗಿ ಸ್ವತ್ತು |
| | ಪಶ್ಚಿಮಕ್ಕೆ:ರಸ್ತೆ |
| | ಉತ್ತರಕ್ಕೆ: ರಸ್ತೆ |
| | ದಕ್ಷಿಣಕ್ಕೆ:ನಾಗಶೆಟ್ಟಿಹಳ್ಳಿ ರಸ್ತೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 162

**ಇ. ಈಶ್ವರ ನಾಯಕ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಮಂ)

## ಅಧಿಸೂಚನೆ

**ಸಂಖ್ಯೆ:ಆರ್‌ಡಿ 9 ಎಲ್‌ಜಿವೈ 2009, ಬೆಂಗಳೂರು, ದಿನಾಂಕ: 8/15ನೇ ಫೆಬ್ರವರಿ, 2010**

ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಸಬ್ ಸೆಕ್ಷನ್ (1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕು ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಕೆಳಕಂಡ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಹೊಸದಾಗಿ ರಚಿಸಲಾಗಿದೆ.

| ಕ್ರ.ಸಂ | ತಾಲ್ಲೂಕು | ಸದಸ್ಯರು | |
|---|---|---|---|
| 1 | ನಾಗಮಂಗಲ | 1). ಶ್ರೀ ಸುರೇಶ್ ಗೌಡ, ಮಾನ್ಯ ಶಾಸಕರು, ನಾಗಮಂಗಲ ವಿಧಾನ ಸಭಾ ಕ್ಷೇತ್ರ | ಅಧ್ಯಕ್ಷರು |
| | | 2) ಶ್ರೀ ಬಿ.ಕೆ. ಕೃಷ್ಣೇಗೌಡ ಬಿನ್ ಕಳಸೇಗೌಡ ಭೀಮನಹಳ್ಳಿ, ದೇವಲಾಪುರ ಹೋಬಳಿ, ನಾಗಮಂಗಲ ತಾಲ್ಲೂಕು | ಸದಸ್ಯರು (ಸಾಮಾನ್ಯ) |
| | | 3) ಶ್ರೀಮತಿ ಜಯಲಕ್ಷಮ್ಮ ಕೋಂ ರಮೇಶ, ಹೊನ್ನಹಳ್ಳಿ ಗ್ರಾಮ, ಹೊಣಕೆರೆ ಹೋಬಳಿ, ನಾಗಮಂಗಲ ತಾಲ್ಲೂಕು | ಸದಸ್ಯರು (ಮಹಿಳೆ) |

| | | | |
|---|---|---|---|
| | | 4) ಶ್ರೀ ಲಕ್ಷಣ ಬಿನ್ ದಾಸಪ್ಪ ಟಿ. ಚನ್ನಾಪುರ, ಹೊಣಕೆರೆ ಹೋಬಳಿ, ನಾಗಮಂಗಲ ತಾ: | ಸದಸ್ಯರು (ಪರಿಶಿಷ್ಟ ಜಾತಿ) |
| | | 5) ತಹಶೀಲ್ದಾರ್, ನಾಗಮಂಗಲ ತಾಲ್ಲೂಕು, | ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 163

**ಎಲ್. ಕೃಷ್ಣಪ್ಪ**
ಪೀಠಾಧಿಕಾರಿ
ಕಂದಾಯ ಇಲಾಖೆ (ಭೂ ಮಂ–2)

**ಅಧಿಸೂಚನೆ ಸಂಖ್ಯೆ:ಆರ್‌ಡಿ 42 ಎಲ್‌ಜಿವೈ 2009, ಬೆಂಗಳೂರು, ದಿನಾಂಕ: 8/15ನೇ ಫೆಬ್ರವರಿ, 2010**

ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಸಬ್ ಸೆಕ್ಷನ್ (1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಕೆಳಕಂಡ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಹೊಸದಾಗಿ ರಚಿಸಲಾಗಿದೆ.

| ಕ್ರ.ಸಂ | ತಾಲ್ಲೂಕು | ಸದಸ್ಯರು | |
|---|---|---|---|
| 1 | ಪಾಂಡವಪುರ | 1). ಶ್ರೀ ಸಿ.ಎಸ್. ಪುಟ್ಟರಾಜು, ಮಾನ್ಯ ಶಾಸಕರು, ಪಾಂಡವಪುರ ವಿಧಾನ ಸಭಾ ಕ್ಷೇತ್ರ | ಅಧ್ಯಕ್ಷರು |
| | | 2) ಶ್ರೀ ಡಿ. ತಿಮ್ಮೇಗೌಡ ಬಿನ್ ದೊಡ್ಡೇಗೌಡ, ಚಿಕ್ಕಾಡೆ, ಪಾಂಡವಪುರ ತಾಲ್ಲೂಕು | ಸದಸ್ಯರು (ಸಾಮಾನ್ಯ) |
| | | 3) ಶ್ರೀಮತಿ ಎ.ಆರ್. ಭವ್ಯ ಕೋಂ ಕೆಂಚೇಗೌಡ, ಅತ್ತಿಗೋನಹಳ್ಳಿ, ಪಾಂಡವಪುರ ತಾಲ್ಲೂಕು | ಸದಸ್ಯರು (ಮಹಿಳೆ) |
| | | 4) ಶ್ರೀ ಬಾಲಕೃಷ್ಣ ಬಿನ್ ವೆಂಕಟಪ್ಪ, ವಿ.ವಿ. ನಗರ ಪಾಂಡವಪುರ ತಾಲ್ಲೂಕು | ಸದಸ್ಯರು (ಪರಿಶಿಷ್ಟ ಜಾತಿ) |
| | | 5) ತಹಶೀಲ್ದಾರ್, ಪಾಂಡವಪುರ ತಾಲ್ಲೂಕು, | ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 164

**ಎಲ್. ಕೃಷ್ಣಪ್ಪ**
ಪೀಠಾಧಿಕಾರಿ ಕಂದಾಯ ಇಲಾಖೆ (ಭೂ ಮಂ–2)

**ಅಧಿಸೂಚನೆ ಸಂಖ್ಯೆ:ಆರ್‌ಡಿ 78 ಎಲ್‌ಜಿಯು 2009, ಬೆಂಗಳೂರು, ದಿನಾಂಕ: 8ನೇ ಫೆಬ್ರವರಿ, 2010**

ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಸಬ್ ಸೆಕ್ಷನ್ (1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಚಿಕ್ಕಮಗಳೂರು ಜಿಲ್ಲೆಯ "ಚಿಕ್ಕಮಗಳೂರು ತಾಲ್ಲೂಕು" ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಕೆಳಕಂಡ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಹೊಸದಾಗಿ ರಚಿಸಲಾಗಿದೆ.

| ಕ್ರ.ಸಂ | ತಾಲ್ಲೂಕು | ಸದಸ್ಯರು | |
|---|---|---|---|
| 1 | ಚಿಕ್ಕಮಗಳೂರು | 1). ಶ್ರೀ ಸಿ.ಟಿ. ರವಿ ಮಾನ್ಯ ಶಾಸಕರು, ಚಿಕ್ಕಮಗಳೂರು ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| | | 2) ಶ್ರೀ ವೈ.ಜಿ. ಸುರೇಶ್ ಬಿನ್ ವೈ. ಗೋವಿಂದ ದೇವರಹಳ್ಳಿ, ಮಲ್ಲೇನಹಳ್ಳಿ ಅಂಚೆ, ಚಿಕ್ಕಮಗಳೂರು ತಾ: | ಸದಸ್ಯರು (ಪ.ಜಾತಿ) |
| | | 3) ಶ್ರೀ ಉಮೇಶ್, ದಂಬಹಳ್ಳಿ, ಮೂಗುತಿಹಳ್ಳಿ ಅಂಚೆ, ಚಿಕ್ಕಮಗಳೂರು ತಾ: | ಸದಸ್ಯರು (ಸಾಮಾನ್ಯ) |
| | | 4) ಶ್ರೀಮತಿ ಕವಿತಾ ಲಿಂಗರಾಜ್ ಕೋಂ ಲಿಂಗರಾಜ್ , ಸಿದ್ದಾಪುರ, ಬಿದರೆ ಅಂಚೆ, ಚಿಕ್ಕಮಗಳೂರು ತಾಲ್ಲೂಕು | ಸದಸ್ಯರು (ಮಹಿಳೆ) |
| | | 5) ತಹಶೀಲ್ದಾರ್, ಚಿಕ್ಕಮಗಳೂರು ತಾಲ್ಲೂಕು, ಚಿಕ್ಕಮಗಳೂರು | ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 165

**ಎಲ್. ಕೃಷ್ಣಪ್ಪ**
ಪೀಠಾಧಿಕಾರಿ ಕಂದಾಯ ಇಲಾಖೆ (ಭೂ ಮಂ–2)